# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 357
ಸದಸ್ಯರ ಹೆಸರು ಶ್ರೀ ಬಿ.ಕೆ. ಹರಿಪ್ರಸಾದ್ (ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕಃ 03.02.2021
ಉತ್ತರಿಸುವ ಸಚಿವರು: ಉಪ ಮುಖ್ಯಮಂತ್ರಿಗಳು, ಲೋಕೋಪಯೋಗಿ ಇಲಾಖೆ

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಸ್ತೆಗಳಲ್ಲಿರುವ ಅನಗತ್ಯ ಮತ್ತು ಅವೈಜ್ಞಾನಿಕ ರಸ್ತೆ ಉಬ್ಬುಗಳನ್ನು ಮತ್ತು ರ್‍ಯಾಂಬ್ಲರ್ ಸ್ಟ್ರಿಪ್ ಗಳನ್ನು ತೆಗೆದುಹಾಕಲು ಮತ್ತು ಅಂತರಾಷ್ಟ್ರೀಯ ಗುಣಮಟ್ಟಗಳಿಗೆ ಅನುಸಾರವಾಗಿ ಅವಶ್ಯಕತೆಯಿರುವಲ್ಲಿ ಮಾತ್ರ ಅವುಗಳನ್ನು ಅಳವಡಿಸಲು ಸುಪ್ರಿಂಕೋರ್ಟ್‌ನಿಂದ ಯಾವುದಾದರೂ ನಿರ್ದೇಶನವಿದೆಯೇ; | ಸರ್ವೋಚ್ಚ ನ್ಯಾಯಾಲಯದ ರಸ್ತೆ ಸುರಕ್ಷತಾ ಸಮಿತಿರವರ ಪತ್ರ F.No.24/CoRS/2014 dated 3rd March 2015 ದಲ್ಲಿ ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಗಳಲ್ಲಿರುವ ರಸ್ತೆ ಉಬ್ಬುಗಳನ್ನು ಮತ್ತು ರ್‍ಯಾಂಬ್ಲರ್ ಸ್ಟ್ರಿಪ್‌ಗಳನ್ನು ತೆಗೆದು ಹಾಕಲು ನಿರ್ದೇಶನ ನೀಡಲಾಗಿದೆ. ("Remove the speed breakers installed in Bangalore-Mysore Highway and on other State /National Highway") (ಪ್ರತಿ ಅನುಬಂಧದಲ್ಲಿ ನೀಡಲಾಗಿದೆ). |
| ಆ | ಈ ಕುರಿತು ಸರ್ಕಾರದ ನಿಲುವೇನು ಮತ್ತು ಸರ್ಕಾರವು ತೆಗೆದುಕೊಂಡ ಕ್ರಮಗಳೇನು ? | ಸರ್ಕಾರದ ಸುತ್ತೋಲೆ ಸಂಖ್ಯೆ: ಲೋಇ 277 ಸಿಆರ್ ಎಂ 2017 ದಿನಾಂಕ 18.04.2017 ರಲ್ಲಿ ರಾಜ್ಯದ ಅವೈಜ್ಞಾನಿಕ ರಸ್ತೆ ಉಬ್ಬುಗಳನ್ನು ಕೂಡಲೇ ತೆರವುಗೊಳಿಸುವುದು ಹಾಗೂ ಕೆಲವು ಸ್ಥಳಗಳಲ್ಲಿ ರಸ್ತೆಯ ಉಬ್ಬುಗಳು ಅವಶ್ಯವೆನಿಸಿದಲ್ಲಿ ಅವೈಜ್ಞಾನಿಕವಾಗಿರುವ ರಸ್ತೆಯ ಉಬ್ಬುಗಳನ್ನು ಐ.ಆರ್.ಸಿ. ಮಾನದಂಡಗಳಿಗನುಗುಣವಾಗಿ ವೈಜ್ಞಾನಿಕವಾಗಿ ಪರಿವರ್ತಿಸಿ, ಅವುಗಳ ನಿರ್ವಹಣೆ ಮಾಡುವುದು. ಈಗಾಗಲೇ ಅಸ್ತಿತ್ವದಲ್ಲಿರುವ ವೈಜ್ಞಾನಿಕ ರಸ್ತೆಯ ಉಬ್ಬುಗಳಿಗೆ ವಾಹನ ಸವಾರರಿಗೆ ದೂರದಿಂದಲೇ ಗೋಚರಿಸುವಂತೆ ಬಣ್ಣ ಬಳಿಯುವುದಲ್ಲದೇ ಕೆಲವು ಮುಖ್ಯ ಸ್ಥಳಗಳಲ್ಲಿ ಬೆಳಕನ್ನು ಪ್ರತಿಫಲಿಸುವ ರೇಡಿಯಂ ಬಣ್ಣದ ಪಟ್ಟಿಗಳನ್ನು ಅಂಟಿಸಿ ಹಾಗೂ Cat Eyes ಅನ್ನು ಅಳವಡಿಸಿ ಅಪಘಾತ ರಹಿತ ಸಂಚಾರಕ್ಕೆ ಅನುವು ಮಾಡಿಕೊಡಲು ಕಟ್ಟುನಿಟ್ಟಿನ ಕ್ರಮ ಕೈಗೊಳ್ಳಲು ಸೂಚಿಸಿದೆ. ಈ ಸೂಚನೆಗಳನ್ವಯ ಇಲಾಖೆಯು ಕ್ರಮ ಕೈಗೊಳ್ಳುತ್ತಿದೆ. |

ಲೋಇ 17 ಸಿಕ್ಯೂಎನ್ 2021(ಇ)

(ಗೋವಿಂದ ಎಂ. ಕಾರಜೋಳ)
ಉಪ ಮುಖ್ಯಮಂತ್ರಿಗಳು,
ಲೋಕೋಪಯೋಗಿ ಇಲಾಖೆ